## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು | : | ಶ್ರೀ ಎನ್.ಅಪ್ಪಾಜಿಗೌಡ ಹಾಗೂ<br>ಶ್ರೀ ಕೆ.ಎ ತಿಪ್ಪೇಸ್ವಾಮಿ |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 142 ((144+77) |
| ಉತ್ತರಿಸಬೇಕಾದ ದಿನಾಂಕ | : | 03.03.2020 |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ. | 2019-20ನೇ ಸಾಲಿನಲ್ಲಿ ಸಣ್ಣ ಮತ್ತು ಅತೀ ಸಣ್ಣ ರೈತರ ಆಭರಣಗಳ ಮೇಲೆ ಶೇಕಡಾ 3ರ ಬಡ್ಡಿದರದಲ್ಲಿ ಬೆಳೆಸಾಲ ವಿತರಿಸಲು "ಗೃಹ ಲಕ್ಷ್ಮೀ ಬೆಳೆ" ಸಾಲ ಯೋಜನೆ ಜಾರಿಗೊಳಿಸಿರುವುದು ನಿಜವೇ; ಜಾರಿಗೊಳಿಸಿದ್ದಲ್ಲಿ, ಸರ್ಕಾರಿ ಆದೇಶ ಸಂಖ್ಯೆ; ಸಿಒ 58 ಸಿ.ಎಲ್.ಎಸ್. 2019 ದಿ;21.02.2019 ರ ಆದೇಶದ ಪ್ರತಿ ಹಾಗೂ ಸಂಪೂರ್ಣ ಮಾಹಿತಿಯನ್ನು ಒದಗಿಸುವುದು. | ಹೌದು.<br><br>ಸದರಿ ವಿಷಯದ ಕುರಿತು ಸರ್ಕಾರದ ಆದೇಶ ಸಂಖ್ಯೆ; ಸಿಒ 58 ಸಿ.ಎಲ್.ಎಸ್.2019. ದಿ:10-07-2019 ರಲ್ಲಿ ಆದೇಶ ಹೊರಡಿಸಿದ್ದು, ಪ್ರತಿ ಲಗತ್ತಿಸಿದೆ. |
| ಆ. | 'ಗೃಹಲಕ್ಷ್ಮೀ ಬೆಳೆ' ಸಾಲ ಯೋಜನೆಯಡಿ ಇದುವರೆಗೂ ಎಷ್ಟು ಫಲಾನುಭವಿಗಳಿಗೆ ಸಾಲ ನೀಡಲಾಗಿರುತ್ತದೆ. ಪ್ರತಿ ಜಿಲ್ಲಾ ಸಹಕಾರಿ ಬ್ಯಾಂಕುವಾರು ಸಂಪೂರ್ಣ ಸಾಲ ವಿತರಣಾ ಮಾಹಿತಿಯನ್ನು ನೀಡುವುದು | 'ಗೃಹಲಕ್ಷ್ಮಿ ಬೆಳೆ ಸಾಲ ಯೋಜನೆ' ಯಡಿ ಇದುವರೆಗೂ 701 ಫಲಾನುಭವಿಗಳಿಗೆ ಸಾಲ ನೀಡಲಾಗಿರುತ್ತದೆ. ಅದರ ವಿವರಗಳು ಕೆಳಕಂಡಂತಿವೆ. |

| ಕ್ರ.ಸಂ. | ಜಿಲ್ಲಾ ಸಹಕಾರಿ ಬ್ಯಾಂಕ್ ಹೆಸರು | ಫಲಾನುಭವಿಗಳ ಸಂಖ್ಯೆ | ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|---|
| 1 | ಬೆಳಗಾವಿ ಡಿಸಿಸಿ ಬ್ಯಾಂಕ್ | 13 | 5.00 |
| 2. | ಕೆ.ಸಿ.ಸಿ.ಬ್ಯಾಂಕ್ ನಿ., ಧಾರವಾಡ | 29 | 22.19 |
| 3. | ಮೈಸೂರು ಡಿಸಿಸಿ ಬ್ಯಾಂಕ್ | 14 | 11.00 |
| 4. | ಚಿಕ್ಕಮಗಳೂರು ಡಿಸಿಸಿ ಬ್ಯಾಂಕ್ | 206 | 177.83 |
| 5. | ಶಿವಮೊಗ್ಗ ಡಿಸಿಸಿ ಬ್ಯಾಂಕ್ | 12 | 12.29 |
| 6. | ಬೆಂಗಳೂರು, ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಡಿಸಿಸಿ ಬ್ಯಾಂಕ್ | 194 | 190.02 |
| 7 | ಕೋಲಾರ ಮತ್ತು ಚಿಕ್ಕಬಳ್ಳಾಪುರ ಡಿಸಿಸಿ ಬ್ಯಾಂಕ್ | 233 | 271.00 |
| | **ಒಟ್ಟು** | **701** | **689.33** |

| | | |
|---|---|---|
| ಇ. | ಈ 'ಗೃಹ ಲಕ್ಷ್ಮೀ ಬೆಳೆ ಸಾಲ ಯೋಜನೆ'ಯನ್ನು ಜಾರಿಗೊಳಿಸದಿರುವ ಬ್ಯಾಂಕುಗಳು ಯಾವುವು ಮತ್ತು ಈ ಬ್ಯಾಂಕುಗಳ ವಿರುದ್ಧ ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | 'ಗೃಹಲಕ್ಷ್ಮೀ ಬೆಳೆಸಾಲ ಯೋಜನೆ'ಯನ್ನು ಜಾರಿಗೊಳಿಸದಿರುವ ಬ್ಯಾಂಕುಗಳು.<br><br>(see table below)<br><br>ಸದರಿ ಯೋಜನೆಯಡಿ ಸಾಲ ನೀಡಲು ಗುರಿ ನಿಗಧಿಪಡಿಸಲಾಗಿದ್ದು, ಸಾಲ ಕೋರಿ ಅರ್ಜಿಗಳು ಬಂದಲ್ಲಿ ಅರ್ಹತೆಯನ್ನು ಪರಿಗಣಿಸಿ ಸಾಲ ನೀಡಲು ಕ್ರಮವಿಡಲು ಸೂಚಿಸಿದೆ. |

| ಕ್ರ.ಸಂ. | ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್‌ಗಳ ಹೆಸರು |
|---|---|
| 1 | ವಿಜಯಪುರ ಡಿಸಿಸಿ ಬ್ಯಾಂಕ್ |
| 2. | ಬಾಗಲಕೋಟೆ ಡಿಸಿಸಿ ಬ್ಯಾಂಕ್ |
| 3. | ಕೆಡಿಸಿಸಿ ಬ್ಯಾಂಕ್ ನಿ., ಶಿರಸಿ, (ಉ.ಕ) |
| 4. | ಮಂಡ್ಯ ಡಿಸಿಸಿ ಬ್ಯಾಂಕ್ |
| 5 | ಹಾಸನ ಡಿಸಿಸಿ ಬ್ಯಾಂಕ್ |
| 6 | ಕೊಡಗು ಡಿಸಿಸಿ ಬ್ಯಾಂಕ್ |
| 7 | ದಕ್ಷಿಣ ಕನ್ನಡ ಡಿಸಿಸಿ ಬ್ಯಾಂಕ್ |
| 8 | ಬಳ್ಳಾರಿ ಡಿಸಿಸಿ ಬ್ಯಾಂಕ್ |
| 9 | ಬೀದರ್ ಡಿಸಿಸಿ ಬ್ಯಾಂಕ್ |
| 10 | ಕಲಬುರ್ಗಿ ಡಿಸಿಸಿ ಬ್ಯಾಂಕ್ |
| 11 | ರಾಯಚೂರು ಡಿಸಿಸಿ ಬ್ಯಾಂಕ್ |
| 12 | ದಾವಣಗೆರೆ ಡಿಸಿಸಿ ಬ್ಯಾಂಕ್ |
| 13 | ಚಿತ್ರದುರ್ಗ ಡಿಸಿಸಿ ಬ್ಯಾಂಕ್ |
| 14 | ತುಮಕೂರು ಡಿಸಿಸಿ ಬ್ಯಾಂಕ್ |

ಸಿಒ 79 ಸಿಎಲ್ಎಸ್ 2020

(ಎಸ್.ಟಿ ಸೋಮಶೇಖರ್)
ಸಹಕಾರ ಸಚಿವರು



# ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: 2019-20 ನೇ ಸಾಲಿನಲ್ಲಿ ಸಣ್ಣ ಮತ್ತು ಅತೀ ಸಣ್ಣ ರೈತರ ಆಭರಣಗಳ ಮೇಲೆ ಶೇ.3 ರ ಬಡ್ಡಿ ದರದಲ್ಲಿ ಬೆಳೆ ಸಾಲ ವಿತರಿಸಲು 'ಗೃಹಲಕ್ಷ್ಮಿ ಬೆಳೆ ಸಾಲ ಯೋಜನೆ ಜಾರಿಗೊಳಿಸುವ ಬಗ್ಗೆ.

ಓದಲಾಗಿದೆ: ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಆರ್‌ಸಿಎಸ್/ಸಿಆರ್‌ಡಿ /ಸಿಎಚ-1/107/2018-19, ದಿನಾಂಕ: 21.02.2019.

* * *

**ಪ್ರಸ್ತಾವನೆ:**

2019-20ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ-85 ರಲ್ಲಿ ಸಹಕಾರ ಇಲಾಖೆಯಲ್ಲಿ "**ರೈತರು ಮತ್ತು ರೈತ ಮಹಿಳೆಯರು ತಮ್ಮ ಕುಟುಂಬದಲ್ಲಿರುವ ಆಭರಣಗಳನ್ನು ಖಾಸಗಿ ಲೇವಾದೇವಿದಾರರಿಗೆ ಹೆಚ್ಚಿನ ಬಡ್ಡಿ ದರದಲ್ಲಿ ಅಡವಿಟ್ಟು ಶೋಷಣೆಗೆ ತುತ್ತಾಗುವುದನ್ನು ತಪ್ಪಿಸಲು 'ಗೃಹಲಕ್ಷ್ಮಿ ಬೆಳೆ ಸಾಲ ಯೋಜನೆ' ಯನ್ನು ಸರ್ಕಾರ ಜಾರಿಗೆ ತರಲಿದೆ. ಈ ಯೋಜನೆಯಡಿಯ ಸಣ್ಣ ಮತ್ತಿ ಅತೀ ಸಣ್ಣ ರೈತರಿಗೆ ಅವರ ಆಭರಣಗಳ ಮೇಲೆ ಶೇ.3 ರಷ್ಟು ಬಡ್ಡಿ ದರದಲ್ಲಿ ಬೆಳೆ ಸಾಲವನ್ನು ನೀಡಲು ಉದ್ದೇಶಿಸಲಾಗಿದೆ**" ಎಂದು ಘೋಷಿಸಲಾಗಿದೆ.

ಮೇಲೆ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಈ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 58 ಸಿಎಲ್‌ಎಸ್ 2019, ಬೆಂಗಳೂರು, ದಿನಾಂಕ:10-07-2019**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರೈತರು ಮತ್ತು ರೈತ ಮಹಿಳೆಯರು ತಮ್ಮ ಕುಟುಂಬದಲ್ಲಿರುವ ಆಭರಣಗಳನ್ನು ಖಾಸಗಿ ಲೇವಾದೇವಿದಾರರಿಗೆ ಹೆಚ್ಚಿನ ಬಡ್ಡಿ ದರದಲ್ಲಿ ಅಡವಿಟ್ಟು, ಶೋಷಣೆಗೆ ತುತ್ತಾಗುವುದನ್ನು ತಪ್ಪಿಸಲು ಸಣ್ಣ ಮತ್ತು ಅತಿಸಣ್ಣ ರೈತರಿಗೆ ಅವರ ಆಭರಣಗಳ ಮೇಲೆ ಶೇ.3 ರಷ್ಟು ಬಡ್ಡಿ ದರದಲ್ಲಿ ಬೆಳೆ ಸಾಲವನ್ನು ವಿತರಿಸಲು "ಗೃಹಲಕ್ಷ್ಮಿ ಬೆಳೆ ಸಾಲ" ಯೋಜನೆ'ಗೆ ಕೆಳಕಂಡ ಷರತ್ತಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

**ಷರತ್ತುಗಳು :**

1. ಈ ಯೋಜನೆಯನ್ನು ಸೂಕ್ತ ಭದ್ರತೆ ವ್ಯವಸ್ಥೆ ಮತ್ತು ವಿಮೆ ಸೌಲಭ್ಯವನ್ನು ಹೊಂದಿರುವ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು, ಲ್ಯಾಂಪ್ಸ್ ಮತ್ತು ಡಿಸಿಸಿ ಬ್ಯಾಂಕುಗಳ ಮೂಲಕ ಜಾರಿಗೊಳಿಸಲಾಗುವುದು.
2. ಗರಿಷ್ಟ 5 ಎಕರೆ ಭೂ ಹಿಡುವಳಿ ಹೊಂದಿರುವ ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಮಾತ್ರ ಈ ಯೋಜನೆ ಅನ್ವಯವಾಗುತ್ತದೆ. ಕುಟುಂಬದಲ್ಲಿ ಪಹಣಿ ಹೊಂದಿದ ಸಣ್ಣ ಮತ್ತು ಅತಿ ಸಣ್ಣ ರೈತರೆಲ್ಲರಿಗೂ ಪ್ರತ್ಯೇಕವಾಗಿ ಈ ಯೋಜನೆಯು ಅನ್ವಯವಾಗುತ್ತದೆ.
3. ಪಾಕ್ಸ್ ಅಥವಾ ಡಿಸಿಸಿ ಬ್ಯಾಂಕಿನ ವ್ಯಾಪ್ತಿಯಲ್ಲಿ ವಾಸವಿರುವ ರೈತರಿಂದ ಅವರ ಇತ್ತೀಚಿನ ಆರ್.ಟಿ.ಸಿ. ಪ್ರತಿಯೊಂದಿಗೆ ಚಿನ್ನಾಭರಣಗಳನ್ನು ಅಡವಿಟ್ಟು ಸಾಲ ವಿತರಿಸತಕ್ಕದ್ದು. ಈ ಸಾಲವನ್ನು ಅಲ್ಪಾವಧಿ ಕೃಷಿ ಉದ್ದೇಶಕ್ಕೆ ಮಾತ್ರ ನೀಡುವುದು. ಪಹಣಿಯಲ್ಲಿ ನಮೂದಿಸಿರುವ ಬೆಳೆಗಳಿಗೆ ಸ್ಕೇಲ್ ಆಫ್ ಫೈನಾನ್ಸ್ ಅಥವಾ NCL (Normal Credit Limit) ಮಿತಿಯೊಳಗೆ ಈ ಸಾಲವನ್ನು ವಿತರಿಸುವುದು. ಈ ಮಿತಿಯನ್ನು ಮೀರಿದ ಸಾಲದ ಮೊತ್ತಕ್ಕೆ ಸರ್ಕಾರದ ಬದ್ಧತೆ ಇರುವುದಿಲ್ಲ. ಈಗಾಗಲೇ ಬೆಳೆ ಸಾಲ ಪಡೆದಿದ್ದರೆ ಬೆಳೆ ಸಾಲ ಮತ್ತು ಚಿನ್ನಾಭರಣ ಸಾಲದ ಒಟ್ಟು ಮೊತ್ತವು NCL ಮಿತಿಗೆ ಮೀರತಕ್ಕದ್ದಲ್ಲ.

...2

4. ಬ್ಯಾಂಕು/ಸಂಘಗಳು ಯೋಜನೆ ಅಡಿಯಲ್ಲಿ ನೀಡುವ ಆಭರಣ ಸಾಲಗಳಿಗೆ ಶೇಕಡ 3ರ ಬಡ್ಡಿ ದರ ಅನ್ವಯವಾಗುತ್ತದೆ. ಈ ಸಾಲವು ಚಿನ್ನಾಭರಣದ ಮಾರುಕಟ್ಟೆ ಮೌಲ್ಯದ ಗರಿಷ್ಟ ಶೇ.80 ರಷ್ಟಕ್ಕೆ ಮೀರದಂತೆ ಮತ್ತು ಗರಿಷ್ಟ ರೂ.2.00 ಲಕ್ಷ ಇದರಲ್ಲಿ ಯಾವುದು ಕಡಿಮೆಯೋ ಆ ಮೊತ್ತಕ್ಕೆ ಸೀಮಿತವಾಗಿರತಕ್ಕದ್ದು. ಕೆಸಿಸಿ (ಬೆಳೆ ಸಾಲ) ಸಾಲ ಮತ್ತು ಚಿನ್ನಾಭರಣ ಸಾಲದ ಒಟ್ಟು ಮೊತ್ತ ರೂ.3.00 ಲಕ್ಷಕ್ಕೆ ಮೀರತಕ್ಕದಲ್ಲ. ರೂ.3.00 ಲಕ್ಷಗಳಿಗ ಮೀರಿದ ಸಂಪೂರ್ಣ ಸಾಲಗಳಿಗೆ ಸಾಮಾನ್ಯ ಬಡ್ಡಿದರ ಅನ್ವಯವಾಗುತ್ತದೆ.

5. ಡಿಸಿಸಿ ಬ್ಯಾಂಕುಗಳ ಮೂಲಕ ಸಾಲ ವಿತರಿಸಿದಲ್ಲಿ, ರೈತರು ವಾಸವಿರುವ ಅಥವಾ ಸಾಲ ಪಡೆದ ಪಾಕ್ಸ್‌ನಿಂದ ಹೊರಬಾಕಿ ಮೊತ್ತದ ಬಗ್ಗೆ ದೃಢೀಕರಣ ಮತ್ತು ನಿರಾಕ್ಷೇಪಣಾ ಪತ್ರ ಪಡೆಯತಕ್ಕದ್ದು. ಪಾಕ್ಸ್‌ಗಳು ರೈತರಿಗೆ ಹೆಚ್ಚುವರಿ ಕೆಸಿಸಿ ಬೆಳೆ ಸಾಲ ವಿತರಿಸುವಾಗ ಆಭರಣ ಸಾಲ ಹೊರಬಾಕಿ ಮಿತಿ ಪರಿಗಣಿಸಿ ಮಂಜೂರು ಮಾಡತಕ್ಕದ್ದು.

6. ಸಾಲದ ಅವಧಿಯನ್ನು ಒಂದು ವರ್ಷಕ್ಕೆ ಮಾತ್ರ ಸೀಮಿತಗೊಳಿಸತಕ್ಕದ್ದು. ಸರ್ಕಾರದ ಬದ್ಧತೆ 1 ವರ್ಷ ಮತ್ತು ಸಾಲ ನೀಡಿರುವ ಮೊತ್ತಕ್ಕೆ ಮಾತ್ರ ಸೀಮಿತವಾಗಿರುತ್ತದೆ. ಸಾಲದ ಅವಧಿಯೊಳಗೆ (1 ವರ್ಷ) ಸಾಲ ಮರುಪಾವತಿ ಮಾಡದಿದ್ದಲ್ಲಿ ಸರ್ಕಾರದ ಬಡ್ಡಿ ಸಹಾಯಧನ ಸೌಲಭ್ಯ ಸಾಲ ಪಡೆದ ದಿನಾಂಕದಿಂದ ಇರುವುದಿಲ್ಲ & ಅವಧಿ ಮೀರಿದ ಸಾಲಗಳಿಗೆ ಬ್ಯಾಂಕುಗಳು ಗಡುವು ದಿನಾಂಕದಿಂದ ತಮ್ಮ ಉಪವಿಧಿಯಲ್ಲಿ ನಿಗಧಿಪಡಿಸಿರುವ ಸಾಮಾನ್ಯ ಬಡ್ಡಿ ದರವನ್ನು ವಿಧಿಸತಕ್ಕದ್ದು ಹಾಗೂ ಕಾನೂನಿನಂತೆ ನಿಯಮಾನುಸಾರ ಕ್ರಮವಿಡತಕ್ಕದ್ದು.

7. ಡಿಸಿಸಿ ಬ್ಯಾಂಕುಗಳು ಮತ್ತು ಪಾಕ್ಸ್‌ಗಳು ತಮ್ಮ ಮೂಲಕ ವಿತರಿಸುವ ಸಾಲಗಳಿಗೆ ಶೇ.7ರ ಬಡ್ಡಿ ಆಕರಣೆ ಮಾಡತಕ್ಕದ್ದು. ರೈತರು ಅವಧಿಯೊಳಗೆ ಮರುಪಾವತಿಸಿದ ಸಾಲಗಳಿಗೆ ರೈತರಿಂದ ಶೇ.7ರ ಬಡ್ಡಿ ವಸೂಲಿ ಮಾಡಿ ಕೂಡಲೇ ಶೇ.4ರ ಪ್ರೋತ್ಸಾಹಧನವನ್ನು ಅವರ ಖಾತೆಗೆ ಜಮಾ ನೀಡತಕ್ಕದ್ದು. ಇದರಿಂದ ರೈತರಿಗೆ ನಿವ್ವಳ ಶೇ.3ರ ಬಡ್ಡಿದರ ಅನ್ವಯವಾಗುತ್ತದೆ.

8. ಈ ಸಾಲಗಳಿಗೆ ಕೇಂದ್ರ ಸರ್ಕಾರದಿಂದ ಲಭ್ಯವಾಗುವ ಶೇ.2ರ ಬಡ್ಡಿ ಸಹಾಯಧನ ಮತ್ತು ಶೇ.3ರ ಬಡ್ಡಿ ಪ್ರೋತ್ಸಾಹಧನವನ್ನು (ಕೇಂದ್ರ ಸರ್ಕಾರದ ಆದೇಶಗೊಳಪಟ್ಟು) ನಬಾರ್ಡ್ ಮೂಲಕ ಕ್ಲೇಮ್ ಮಾಡತಕ್ಕದ್ದು.

9. ರಾಜ್ಯ ಸರ್ಕಾರದಿಂದ ಡಿಸಿಸಿ ಬ್ಯಾಂಕುಗಳಿಂದ ವಿತರಿಸಿದ ಸಾಲಗಳಿಗೆ ಶೇ.3ರ ಬಡ್ಡಿ ಸಹಾಯಧನವನ್ನು ಮತ್ತು ಪಾಕ್ಸ್‌ಗಳ ಮೂಲಕ ವಿತರಿಸಿದ ಸಾಲಗಳಿಗೆ ಶೇ.4ರ ಬಡ್ಡಿ ಸಹಾಯಧನವನ್ನು ಕ್ಲೇಮ್ ಮಾಡತಕ್ಕದ್ದು. ಡಿಸಿಸಿ ಬ್ಯಾಂಕುಗಳಿಂದ ಸಂಘಗಳು ಸಾಲ ಪಡೆದಿದ್ದರೆ, ಡಿಸಿಸಿ ಬ್ಯಾಂಕುಗಳು ಸಂಘಗಳಿಗೆ ಶೇ.2ರ ಮಾರ್ಜಿನ್ ನೀಡತಕ್ಕದ್ದು.

10. ಸದರಿ ಸಾಲ ಯೋಜನೆಗೆ ಸಂಘಗಳು ಮತ್ತು ಬ್ಯಾಂಕುಗಳು ತಮ್ಮ ಬಂಡವಾಳ ಹಾಗೂ ಸಾಲ ನೀಡುವ ಸಂಸ್ಥೆಗಳಿಂದ ಪುನರ್ಧನ ಪಡೆದ ಮೊತ್ತದಿಂದ ಜಾರಿಗೊಳಿಸತಕ್ಕದ್ದು. ಸರ್ಕಾರದ ಬದ್ಧತೆ ಕೇವಲ ಬಡ್ಡಿ ರಿಯಾಯಿತಿಗೆ ಮಾತ್ರ ಸೀಮಿತವಾಗಿರುತ್ತದೆ.

11. ಬ್ಯಾಂಕುಗಳು ಮತ್ತು ಪಾಕ್ಸ್‌ಗಳು ನಿಯಮಾನುಸಾರ ಚಿನ್ನಾಭರಣ ಮೌಲ್ಯಮಾಪಕರನ್ನು ನೇಮಿಸಕೊಳ್ಳತಕ್ಕದ್ದು ಹಾಗೂ ಚಿನ್ನಾಭರಣಗಳ ಭದ್ರತೆಗಳಿಗೆ ಎಲ್ಲಾ ಅವಶ್ಯ ಕ್ರಮಗಳನ್ನು ಕೈಗೊಳ್ಳತಕದ್ದು.

12. ಈ ಸಾಲಗಳಿಗೆ ಚಿನ್ನಾಭರಣ ಮೌಲ್ಯಮಾಪನ ಶುಲ್ಕವನ್ನು ಹೊರತುಪಡಿಸಿ ಯಾವುದೇ ಹೆಚ್ಚುವರಿ ಷೇರು ಮತ್ತು ಅಥವಾ ಇತರೆ ಶುಲ್ಕವನ್ನು ವಸೂಲು ಮಾಡತಕ್ಕದಲ್ಲ.

13. ಸದರಿ ಯೋಜನೆಯಡಿಯಲ್ಲಿ ಚಿನ್ನಾಭರಣ ಸಾಲ ನೀಡುವಾಗ ಪ್ರಚಲಿತದಲ್ಲಿರುವ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು. ಸದರಿ ನಿಯಮಗಳಿಗೆ ವ್ಯತಿರಿಕ್ತವಾಗಿ ಸಾಲ ನೀಡಿದಲ್ಲಿ ಅಂತಹ ಸಾಲಗಳಿಗೆ ಸರ್ಕಾರದ ಬಡ್ಡಿ ರಿಯಾಯಿತಿ ಯೋಜನೆ ಪದ್ಧತಿ ಇರುವುದಿಲ್ಲ.

14. ಸಹಕಾರ ಸಂಘಗಳ ನಿಬಂಧಕರು ಸಂಬಂಧಪಟ್ಟ ಮರುಭರಣ ಬಿಲ್ಲುಗಳು ತ್ರೈಮಾಸಿಕವಾಗಿ ಪಡೆದು ಪರಿಶೀಲನೆ ಆದ ನಂತರ ದೃಢೀಕೃತ ಬಿಲ್ಲುಗಳ ಆಧಾರದ ಮೇಲೆ ಸಂಬಂಧಪಟ್ಟ ಸಂಸ್ಥೆಗಳಿಗೆ ಹಣವನ್ನು ಬಿಡುಗಡೆ ಮಾಡತಕ್ಕದ್ದು ಹಾಗೂ ಹಣದ ಉಪಯೋಗದ ಬಗ್ಗೆ ತ್ರೈಮಾಸಿಕ ಪ್ರಗತಿ ವರದಿಗಳನ್ನು ಸಲ್ಲಿಸತಕ್ಕದ್ದು ಮತ್ತು ನಿಗದಿತ ನಮೂನೆಯಲ್ಲಿ ಉಪಯೋಗ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

15. ಸಹಕಾರ ಸಂಘಗಳ ನಿಬಂಧಕರು ಈ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಅಗತ್ಯವಾದ ಎಲ್ಲಾ ಕ್ರಮಗಳನ್ನು ಕೈಗೊಳ್ಳತಕ್ಕದ್ದು ಮತ್ತು ಅಗತ್ಯವಾದ ಮಾರ್ಗದರ್ಶನ ಮತ್ತು ಸೂಚನೆಗಳನ್ನು ನೀಡಲು ಸಕ್ಷಮರಾಗಿರತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 96 ವೆಚ್ಚ-2/2019 ದಿನಾಂಕ:09-07-2019 ರಲ್ಲಿ ಹಾಗೂ ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ:ಪಿಡಿ 18 ಎಫ್ಆರ್ಬಿ 2019 ದಿನಾಂಕ:03-05-2019 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
10/7/19.
(ಬಿ.ಎಸ್.ಹಲೇಶ್)
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಇವರಿಗೆ :**

ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ, ಬೆಂಗಳೂರು ಇವರಿಗೆ ಕರ್ನಾಟಕ ರಾಜ್ಯಪತ್ರದಲ್ಲಿ ಕೂಡಲೇ ಪ್ರಕಟಿಸಿ, ಅದರ 100 ಪ್ರತಿಗಳನ್ನು ಒದಗಿಸಲು ಕೋರಿದೆ.

**ಪ್ರತಿಗಳು :**

1) ಪ್ರಧಾನ ಮಹಾಲೇಖಪಾಲರು, (ಜಿ&ಎಸ್ಎಸ್ಎ)/(ಇ&ಆರ್ಎಸ್ಎ)/(ಎ&ಇ), ಕರ್ನಾಟಕ ರಾಜ್ಯ, ಬೆಂಗಳೂರು.
2) ಮಾನ್ಯ ಮುಖ್ಯಮಂತ್ರಿಗಳ ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು.
3) ಮಾನ್ಯ ಸಹಕಾರ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು.
4) ಸರ್ಕಾರದ ಮುಖ್ಯ ಕಾರ್ಯದರ್ಶಿಯವರು, ವಿಧಾನಸೌಧ, ಬೆಂಗಳೂರು
5) ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರು, ವಿಧಾನಸೌಧ, ಬೆಂಗಳೂರು
6) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಆರ್ಥಿಕ ಇಲಾಖೆ, ವಿಧಾನಸೌಧ, ಬೆಂಗಳೂರು
7) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಯೋಜನಾ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು
8) ಸಹಕಾರ ಸಂಘಗಳ ನಿಬಂಧಕರು, ನಂ.1, ಅಲಿ ಆಸ್ಕರ್ ರಸ್ತೆ, ಬೆಂಗಳೂರು-52
9) ಮುಖ್ಯ ಪ್ರಧಾನ ವ್ಯವಸ್ಥಾಪಕರು, ನಬಾರ್ಡ್ ಪ್ರಾಂತೀಯ ಕಛೇರಿ, ಕೆ.ಜಿ. ರಸ್ತೆ, ಬೆಂಗಳೂರು
10) ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು, ಶಂಕರಮಠ ರಸ್ತೆ, ಬಸವನಗುಡಿ, ಬೆಂಗಳೂರು
11) ಎಲ್ಲಾ ಪ್ರಾಂತೀಯ ಸಹಕಾರ ಸಂಘಗಳ ಜಂಟಿ ನಿಬಂಧಕರು
12) ಎಲ್ಲಾ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕುಗಳ ಮುಖ್ಯಕಾರ್ಯನಿರ್ವಹಣಾಧಿಕಾರಿಗಳು
13) ಎಲ್ಲಾ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು
14) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ನಿ., ಉತ್ತುಂಗ, ನಂ.1, ಪಂಪಾಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು-18
15) ಆಂತರಿಕ ಆರ್ಥಿಕ ಸಲಹೆಗಾರರು, ಸಹಕಾರ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು
16) ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ಸಹಕಾರ ಇಲಾಖೆ, ಬೆಂಗಳೂರು
17) ರಾಜ್ಯ ಹುಜೂರ್ ಖಜಾನೆ, ನೃಪತುಂಗ ರಸ್ತೆ, ಬೆಂಗಳೂರು
18) ರಾಜ್ಯ ಖಜಾನೆ ಅಧಿಕಾರಿ, ಜೆ.ಸಿ. ರಸ್ತೆ, ಬೆಂಗಳೂರು
19) ಶಾಖಾ ರಕ್ಷಾ ಕಡತ : ಹೆಚ್ಚುವರಿ ಪ್ರತಿ